# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪಶ್ನೆ ಸಂಖ್ಯೆ : 864 (942)
ವಿಧಾನ ಪರಿಷತ್ ಸದಸ್ಯರ ಹೆಸರು : ಶ್ರೀ ಸುನೀಲ್ ವಲ್ಯಾಪುರ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 28.09.2020
ಉತ್ತರಿಸಬೇಕಾದ ಸಚಿವರು : ಮಾನ್ಯ ಅರಣ್ಯ ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

| ಸಂಖ್ಯೆ | ಪ್ರಶ್ನೆ ಸಂಖ್ಯೆ | ಉತ್ತರ |
|---|---|---|
| ಅ) | ಪರಿಸರ ಇಲಾಖಾ ವ್ಯಾಪ್ತಿಗೆ ಬರುವ ಕೇಂದ್ರ ಪುರಸ್ಕೃತ ಯೋಜನೆಗಳು ಮತ್ತು ಅನುದಾನ ವಿವರಗಳೇನು; | ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಇಲಾಖೆಯ ವ್ಯಾಪ್ತಿಯಲ್ಲಿರುವ ಜೀವಿಪರಿಸ್ಥಿತಿ ಮತು ಪರಿಸರ ವಿಭಾಗದ ವ್ಯಾಪ್ತಿಯಲ್ಲಿ ಯಾವುದೇ ಕೇಂದ್ರ ಪುರಸ್ಕೃತ ಯೋಜನೆಗಳು ಇರುವುದಿಲ್ಲ. |
| ಆ) | ಕಳೆದ ಮೂರು ವರ್ಷಗಳಲ್ಲಿ ರಾಷ್ಟ್ರೀಯ ಸರೋವರ ಸಂರಕ್ಷಣಾ ಯೋಜನೆಯಡಿಯಲ್ಲಿ ಅನುಷ್ಠಾನಗೊಳಿಸಿದ ಕಾಮಗಾರಿಗಳು ಯಾವುವು? (ಅವುಗಳ ಪ್ರಗತಿ ಮತು ಉಪಯುಕ್ತತೆ ಬಗ್ಗೆ ಮಾಹಿತಿ ನೀಡುವುದು) | ಕಳೆದ ಮೂರು ವರ್ಷಗಳಲ್ಲಿ ರಾಷ್ಟ್ರೀಯ ಸರೋವರ ಸಂರಕ್ಷಣಾ ಯೋಜನೆಯಡಿಯಲ್ಲಿ ಯಾವುದೇ ಕಾಮಗಾರಿಗಳನ್ನು ಅನುಷ್ಠಾನಗೊಳಿಸಿರುವುದಿಲ್ಲ. |
| ಇ) | ಕಳೆದ ಮೂರು ವರ್ಷಗಳಲ್ಲಿ ಪರಿಸರ ಇಲಾಖೆ ಅನುಷ್ಠಾನಗೊಳಿಸಿದ ರಾಜ್ಯ ಮತ್ತು ಕೇಂದ್ರ ಪುರಸ್ಕೃತ ಯೋಜನೆಗಳ ವಿವರಗಳು ಪಡೆದ ಅನುದಾನ, ಗುರಿ ಮತ್ತು ಸಾಧನೆ ಕುರಿತಾದ ವಿವರಗಳೇನು? | ಕಳೆದ ಮೂರು ವರ್ಷಗಳಲ್ಲಿ ಜೀವಿಪರಿಸ್ಥಿತಿ ಮತು ಪರಿಸರ ವಿಭಾಗದ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸಿದ ರಾಜ್ಯ ಪುರಸ್ಕೃತ ಯೋಜನೆಗಳ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ. |

**ಸಂಖ್ಯೆ**: ಅಪಜೀ 52 ಇಎನ್‌ಜಿ 2020

(ಆನಂದ್ ಸಿಂಗ್)
ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು.

# ಅನುಬಂಧ

ಜೀವಿಪರಿಸ್ಥಿತಿ ಮತ್ತು ಪರಿಸರ ವಿಭಾಗದ ವ್ಯಾಪ್ತಿಯಲ್ಲಿ ಅಭಿವೃದ್ಧಿಗೆ ಸಂಬಂಧಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿರುವುದಿಲ್ಲ. ಆದರೆ ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ, ರಾಜ್ಯ ಪರಿಸರ ಆಘಾತ ಅಂದಾಜೀಕರಣ ಪ್ರಾಧಿಕಾರ, ಕರ್ನಾಟಕ ಜೀವ ವೈವಿಧ್ಯ ಮಂಡಳಿ ಮತ್ತು ಕರ್ನಾಟಕ ರಾಜ್ಯ ಮೇಲ್ಮನವಿ ಪ್ರಾಧಿಕಾರಗಳಿಗೆ ಅನುದಾನವನ್ನು ಸಹಾಯಾನುದಾನ ರೂಪದಲ್ಲಿ ನೀಡಲಾಗುತ್ತಿದೆ. ಕಡಲ ತೀರ ನಿರ್ವಹಣೆ ಯೋಜನೆಯಡಿಯಲ್ಲಿ ಪ್ರಾದೇಶಿಕ ನಿರ್ದೇಶಕರು (ಪರಿಸರ) ಮಂಗಳೂರು, ಉಡುಪಿ ಮತ್ತು ಕಾರವಾರ ಕಛೇರಿಗಳಿಗೆ ವೇತನ ಮತ್ತು ಆಡಳಿತಾತ್ಮಕ ವೆಚ್ಚಗಳಿಗಾಗಿ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. ಮುಂದುವರೆದು, ಈ ವಿಭಾಗದ ವ್ಯಾಪ್ತಿಯಲ್ಲಿರುವ 2020-21ನೇ ಸಾಲಿನ ಯೋಜನೆಗಳ ವಿವರಗಳನ್ನು ಈ ಕೆಳಕಂಡ ಪಟ್ಟಿಯಲ್ಲಿ ನೀಡಲಾಗಿದೆ.

**(ರೂ. ಲಕ್ಷಗಳಲ್ಲಿ)**

| ಕ್ರ. ಸಂ | ಲೆಕ್ಕ ಶೀರ್ಷಿಕೆ ಮತ್ತು ಯೋಜನೆಯ ಹೆಸರು | 2020-21ನೇ ಸಾಲಿನಲ್ಲಿ ಒದಗಿಸಲಾಗಿರುವ ಅನುದಾನ | ಇಲ್ಲಿಯವರೆಗೂ ಬಿಡುಗಡೆ ಮಾಡಲಾದ ಅನುದಾನ |
|---|---|---|---|
| 1. | 3435-03-003-0-01<br>ಪರಿಸರ ಸಂಶೋಧನೆ ಶಿಕ್ಷಣ ಮತ್ತು ನವವಿಧಾನಾತ್ಮಕ ಯೋಜನೆಗಳು | 10.00 | 0.00 |
| 2. | 3435-03-003-0-15<br>ಪರಿಸರ ನಿರ್ವಹಣೆ ಮತ್ತು ಕಾರ್ಯನೀತಿ ಸಂಶೋಧನಾ ಸಂಸ್ಥೆ | 603.00 | 197.84 |
| 3. | 3435-03-101-0-03<br>ರಾಜ್ಯ ಪರಿಸರ ಆಘಾತ ಅಂದಾಜೀಕರಣ ಪ್ರಾಧಿಕಾರಕ್ಕೆ ಸಹಾಯಾನುದಾನ | 63.00 | 22.09 |
| 4. | 3435-03-103-0-07<br>ಜೈವಿಕ ವೈವಿಧ್ಯ ರಕ್ಷಣೆ | 437.00 | 147.53 |
| 5. | 3435-03-103-0-07<br>ಕರ್ನಾಟಕ ರಾಜ್ಯ ಮೇಲ್ಮನವಿ ಪ್ರಾಧಿಕಾರಕ್ಕೆ ಸಹಾಯಾನುದಾನ | 73.00 | 24.57 |
| 6. | 3435-60-800-0-03<br>ತೀರ ಪ್ರದೇಶ ನಿರ್ವಹಣೆ | 130.00 | 53.073 |
| | **ಒಟ್ಟು** | **1316.00** | **445.103** |

ಕಳೆದ 3 ವರ್ಷದ ಆಯ-ವ್ಯಯದಲ್ಲಿ ಜೀವಿಪರಿಸ್ಥಿತಿ ಮತ್ತು ಪರಿಸರ ವಿಭಾಗಕ್ಕೆ ಒದಗಿಸಲಾದ ಅನುದಾನದ ವಿವರ ಈ ಕೆಳಕಂಡ ಪಟ್ಟಿಯಲ್ಲಿ ನೀಡಲಾಗಿದೆ.

**(ರೂ. ಲಕ್ಷಗಳಲ್ಲಿ)**

| ಕ್ರ.ಸಂ | ಆರ್ಥಿಕ ವರ್ಷ | ಒದಗಿಸಲಾದ ಅನುದಾನ | ವೆಚ್ಚ ಮಾಡಲಾದ ಅನುದಾನ |
|---|---|---|---|
| 1. | 2017-18 | 2148.47 | 1569.87 |
| 2. | 2018-19 | 1203.00 | 1010.30 |
| 3. | 2019-20 | 1595.85 | 978.33 |

*_*_*